# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1916 (2347) |
| ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ ಡಿ.ಎಸ್.ಅರುಣ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 21.03.2022 |
| ಉತ್ತರಿಸುವ ಸಚಿವರು | : | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು. |

*****

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆಯುಷ್ ಮತ್ತು ಅಲೋಪಥಿ ವೈದ್ಯಾಧಿಕಾರಿಗಳಿಗೆ ಸಮಾನವಾಗಿ ನೀಡಲಾಗುತ್ತಿದ್ದ ವಿಶೇಷ ಭತ್ಯೆಯನ್ನು ಸೆಪ್ಟಂಬರ್ 2020ರಲ್ಲಿ ಕೇವಲ ಅಲೋಪತಿ ವೈದ್ಯಾಧಿಕಾರಿಗಳಿಗೆ ಮಾತ್ರ ಹೆಚ್ಚಿಸಿ ಆದೇಶ ಹೊರಡಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ಬಂದಿದ್ದಲ್ಲಿ ಆದೇಶ ಸಂಖ್ಯೆ ನಂ.ಸಂ 47/2013 ರಲ್ಲಿ "ಕಾಲಕಾಲಕ್ಕೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ವೈದ್ಯಾಧಿಕಾರಿಗಳಿಗೆ ದೊರೆಯುವ ಎಲ್ಲಾ ಸವಲತ್ತು, ವೇತನ ಭತ್ಯೆ ಸ್ಥಾನಮಾನಗಳನ್ನು ಆಯುಷ್ ವೈದ್ಯಾಧಿಕಾರಿಗಳಿಗೂ ವಿಸ್ತರಿಸುವ ಕುರಿತಂತೆ ದಿ:31/07/13ರಂದು ಆದೇಶವನ್ನು ಹೊರಡಿಸಲಾಗಿದ್ದು, ವಿಶೇಷ ಭತ್ಯೆಯನ್ನು ಕೇವಲ ಅಲೋಪಥಿ ವೈದ್ಯಾಧಿಕಾರಿಗಳಿಗೆ ಮಾತ್ರ ಹೆಚ್ಚಿಸಿ -ಆಯುಷ್ ವೈದ್ಯಾಧಿಕಾರಿಗಳಿಗೆ ಹೆಚ್ಚಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಇ) | ಆಲೋಪಥಿ ವೈದ್ಯರಿಗೆ ಹೆಚ್ಚಿಸಲಾಗಿರುವ ವಿಶೇಷ ಭತ್ಯೆಯನ್ನು ಆಯುಷ್ ವೈದ್ಯಾಧಿಕಾರಿಗಳಿಗೂ ವಿಸ್ತರಿಸುವ ಕುರಿತಂತೆ ಹಲವಾರು ಮನವಿಗಳು ಸಲ್ಲಿಕೆಯಾಗಿದ್ದು, ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ಒದಗಿಸುವುದು) | ಪ್ರಸ್ತುತ ರಾಜ್ಯದಲ್ಲಿ ಕೋವಿಡ್ ಪ್ರಕರಣಗಳ ಸಂಖ್ಯೆ ಇಳಿಕೆಯಾಗುತ್ತಿರುವ ಹಾಗೂ ರಾಜ್ಯದಲ್ಲಿನ ಆರ್ಥಿಕ ಪರಿಸ್ಥಿತಿಯಲ್ಲಿ ಯಾವುದೇ ಹೆಚ್ಚುವರಿ ವೆಚ್ಚವನ್ನು ಭರಿಸಲು ಅವಕಾಶವಾಗದಿರುವ ಹಿನ್ನಲೆಯಲ್ಲಿ ಆಲೋಪಥಿ ವೈದ್ಯರಿಗೆ ಹೆಚ್ಚಿಸಲಾಗಿರುವ ವಿಶೇಷ ಭತ್ಯೆಯನ್ನು ಆಯುಷ್ ವೈದ್ಯಾಧಿಕಾರಿಗಳಿಗೂ ವಿಸ್ತರಿಸುವ ಪ್ರಸ್ತಾವನೆಯನ್ನು ಸಧ್ಯಕ್ಕೆ ಕೈಬಿಡಲಾಗಿದೆ. |

(ಡಾ. ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು.

ಸಂಖ್ಯೆ: ಆಕುಕ 84 ಪಿಐಎಮ್ 2022